# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2028 |
| ಸದಸ್ಯರ ಹೆಸರು | ಶ್ರೀ ಎಸ್.ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 24.03.2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹುಣಸೂರು ಜಿಲ್ಲೆ (ಡಿ.ದೇವರಾಜ ಅರಸ್ ಜಿಲ್ಲೆ) ಯನ್ನು ರಚಿಸುವ ಬಗ್ಗೆ ಜನಾಭಿಪ್ರಾಯ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಬಗ್ಗೆ ಸಾರ್ವಜನಿಕರಿಂದ ಮನವಿಗಳು ಬಂದಿದೆಯೇ; ಈ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; | ಮೈಸೂರು ಜಿಲ್ಲೆಯನ್ನು ವಿಭಜಿಸಿ ಹುಣಸೂರು ಜಿಲ್ಲೆಯನ್ನು ರಚಿಸುವ ಕುರಿತು ಮನವಿಗಳು ಸ್ವೀಕೃತವಾಗಿರುತ್ತವೆ. ಆದರೆ ಈ ಪ್ರಸ್ತಾವನೆಯು ಪ್ರಸ್ತುತ ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |
| ಆ) | ವರುಣಾ ಮತ್ತು ಬನ್ನೂರು ತಾಲ್ಲೂಕುಗಳ ರಚನೆಯ ಬಗ್ಗೆ ಸರ್ಕಾರಕ್ಕೆ ಮನವಿಗಳು ಬಂದಿವೆಯೇ; ಈ ಎರಡು ತಾಲ್ಲೂಕುಗಳನ್ನು ರಚಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; | ವರುಣಾ ಮತ್ತು ಬನ್ನೂರು ತಾಲ್ಲೂಕುಗಳ ರಚನೆಗೆ ಮನವಿಗಳು ಸ್ವೀಕೃತವಾಗಿರುತ್ತವೆ. ಈ ಪೈಕಿ ವರುಣಾ ತಾಲ್ಲೂಕಿನ ರಚನೆಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ಸ್ವೀಕೃತವಾಗಿದ್ದು, ಪರಿಶೀಲಿಸಲಾಗುವುದು. ಬನ್ನೂರು ತಾಲ್ಲೂಕು ರಚನೆ ಕುರಿತು ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |
| ಇ) | ಮೇಲ್ಕಂಡ ವಿಚಾರದಲ್ಲಿ ಅಧ್ಯಯನ ನಡೆಸಿ ವರದಿ ಸಲ್ಲಿಸಲು ಸಮಿತಿಯನ್ನು ರಚಿಸಲಾಗುವುದೇ? | ಇಲ್ಲಾ |

**ಸಂಖ್ಯೆ: ಕಂಇ 29 ಎಲ್‌ಆರ್‌ಡಿ 2021**

(ಆರ್.ಅಶೋಕ)
ಕಂದಾಯ ಸಚಿವರು